ಡಿ. ಸ್ಮಿತಾರೆಡ್ಡಿ *

# ಆನೇಕಲ್ ತಾಲ್ಲೂಕಿನ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿಯ ಶಿಲಾಯುಗದ ನಿವೇಶನಗಳು

ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕಿಗೆ ಸೇರಿದ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿ ಎಂಬ ಕುಗ್ರಾಮದಲ್ಲಿನ ಶಿಲಾಯುಗದ ಅವಶೇಷಗಳ ಬಗ್ಗೆ ಪ್ರಸ್ತುತ ಈ ಲೇಖನವನ್ನು ರಚಿಸಿದ್ದೇನೆ.

ಮೇಲೂರು ದಿಣ್ಣೆ ಎಂದು ಕರೆಯುವ ಸ್ಥಳವು ಆನೇಕಲ್‌ನಿಂದ ೮ ಕಿ. ಮೀ. ದೂರದಲ್ಲಿದೆ. ಈ ಸ್ಥಳದ ವ್ಯಾಪ್ತಿಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳ ದೊಡ್ಡದೊಂದು ನಿವೇಶನವಿದೆ. ಇಲ್ಲಿ ಶಿಲಾವೃತ್ತಗಳುಳ್ಳ ಸು. ೭೫ ಸಮಾಧಿಗಳಿದ್ದು, ಇವುಗಳಲ್ಲಿ ಸು. ೫೫ ಸಮಾಧಿಗಳು ಸಂಪೂರ್ಣ ಹಾಳಾಗಿವೆ. ಇವುಗಳನ್ನು ಅಗೆದು ಆ ಭೂಮಿಯನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲಾಗಿದೆ. ಹಾಳಾಗದಂತೆ ಉಳಿದಿರುವ ಸಮಾಧಿಗಳ ಸುತ್ತಲೂ ಏಳು ಮೀಟರ್ ವ್ಯಾಸವಿರುವ ಶಿಲಾವೃತ್ತಗಳನ್ನು ಹೊಂದಿವೆ. ಇಲ್ಲಿ ಅಗೆಯಲ್ಪಟ್ಟ ಸಮಾಧಿಗಳನ್ನು ಪರಿಶೀಲಿಸಿದಾಗ ಕಪ್ಪು ಹಾಗೂ ಕೆಂಪಿನ ಮಡಿಕೆ-ಕುಡಿಕೆ ಚೂರುಗಳು ದೊರೆತವು. ಹಾಗೂ ಮೂಳೆ ಚೂರುಗಳೂ ದೊರೆತಿವೆ.[1]

ಮೇಲೂರು ದಿಣ್ಣೆಯ ದಕ್ಷಿಣಕ್ಕೆ ಒಂದು ಕಿ.ಮೀ. ದೂರದಲ್ಲಿರುವ ಕಾಳನಾಯಕನಹಳ್ಳಿಯು ಆನೇಕಲ್‌ನಿಂದ ೬ ಕಿ.ಮೀ. ದೂರದಲ್ಲಿದೆ. ಇದು ಬೃಹತ್ ಶಿಲಾಯುಗದ ಮಾನವನ ನೆಲೆಯಾಗಿದ್ದುದಕ್ಕೆ ಸಾಕ್ಷಿಯಾಗಿ ಇಲ್ಲಿ ೨೪ ಸಮಾಧಿಗಳು ಪತ್ತೆಯಾಗಿವೆ. ಇವುಗಳಲ್ಲಿ ೧೪ ಸಮಾಧಿಗಳು ವ್ಯವಸಾಯಗಾರರ ಧಾಳಿಗೆ ಗುರಿಯಾಗಿ ಸಂಪೂರ್ಣ ಹಾಳಾಗಿವೆ. ಸುರಕ್ಷಿತವಾಗಿರುವ ಸಮಾಧಿಗಳ ಸುತ್ತಲೂ ಕಾಡುಗಲ್ಲು (ಉರುಟು ಕಲ್ಲು)ಗಳಿಂದ ನಿರ್ಮಿಸಿದ ವೃತ್ತಗಳಿವೆ.[2]

ಇಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಗೆಯಲ್ಪಟ್ಟಿರುವ ಬೃಹತ್ ಶಿಲಾಯುಗ ಸಮಾಧಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಹಲವಾರು ಮಡಿಕೆ ಕುಡಿಕೆ ಚೂರುಗಳು



ಶಿಲಾಯುಗದ ಮಣ್ಣಿನ ಗೊಂಬೆಗಳು

ಮತ್ತು ಎರಡು ಮಣ್ಣಿನ ಗೊಂಬೆಗಳು ದೊರೆತವು. ಇಲ್ಲಿಯ ಒಂದು ಸಣ್ಣ ಬಂಡೆಯ ಮೇಲೆ ನಾಲ್ಕು ಅಂಗುಲ ಎತ್ತರದ ಜಿಂಕೆಯ ರೇಖಾಚಿತ್ರವೂ ದೊರೆತಿದೆ. ಇಲ್ಲಿ ಭೂಮಿಯನ್ನು ಉಳುವಾಗ ದೊರೆತ ಕಬ್ಬಿಣದ ಕೊಡಲಿಯೊಂದನ್ನು ಅಲ್ಲಿನ

* ಎಂ. ಎ. ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು-೫೬೦ ೦೫೬

1 ಇಲ್ಲಿಯ ಕ್ಷೇತ್ರಕಾರ್ಯದಲ್ಲಿ ನನ್ನೊಡನೆ ಬಂದು ಸಹಕರಿಸಿದ ಸನತ್‌ಕುಮಾರ್ ಡಿ, ಹಾಗೂ ಗೆಳತಿ ಸೆಲ್ವಿಗೆ ಕೃತಜ್ಞತೆಗಳನ್ನರ್ಪಿಸುತ್ತೇನೆ.

2 ಇಲ್ಲಿಯ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಪುಟಾಣಿಗಳಾದ ಎನ್. ಚಿತ್ರ, ಎನ್. ಶುಚೀಂದ್ರ, ವೀಣಾರಿಗೆ ನಾನು ಆಭಾರಿಯಾಗಿದ್ದೇನೆ.

3 ಕಬ್ಬಿಣದ ಕೊಡಲಿಯನ್ನು ನನಗೆ ಕೊಟ್ಟು ಉಪಕರಿಸಿದ ವನಕನಹಳ್ಳಿ ಮುನಿಯಪ್ಪ ಮತ್ತು ಅವರ ಮಗ ಕುಮಾರ ಅವರಿಗೆ ಕೃತಜ್ಞಳಾಗಿದ್ದೇನೆ.

ನಿವಾಸಿಗಳು ನೀಡಿರುತ್ತಾರೆ.[3] ಇಲ್ಲಿ ದೊರೆತ ಮಡಕೆಯ ಚೂರುಗಳು ಕಪ್ಪು ಹಾಗೂ ಕೆಂಪು ಬಣ್ಣದಿಂದ ಕೂಡಿವೆ. ಕೊಡಲಿಯು ೨೩ ಸೆಂ.ಮೀ. ಉದ್ದ ಹಾಗೂ ೧೦ ಸೆಂ.ಮೀ. ಅಗಲವಾಗಿದೆ. ಈ ಸಮಾಧಿಗಳ ಕಾಲವನ್ನು ಕಬ್ಬಿಣದ ಯುಗಕ್ಕೆ ಸೇರಿಸಬಹುದಾಗಿದೆ.

### ಗೊಂಬೆಗಳು

ಇಲ್ಲಿ ದೊರೆತ ಗೊಂಬೆಗಳು ಜೇಡಿಮಣ್ಣಿನಿಂದ ಮಾಡಲ್ಪಟ್ಟಿದ್ದು, ಒಂದು ಹೆಣ್ಣು ಹಾಗೂ ಮತ್ತೊಂದು ಗಂಡಿನದಾಗಿದೆ. ಹೆಣ್ಣು ಗೊಂಬೆಯು ೬.೪ ಸೆಂ.ಮೀ. ಎತ್ತರ ಹಾಗೂ ೭.೫ ಸೆಂ.ಮೀ. ಅಗಲವಾಗಿದೆ. ಈ ಗೊಂಬೆಯ ತಲೆ ಹಾಗೂ ಕೈಕಾಲುಗಳು ತುಂಡಾಗಿವೆ. ಎರಡೂ ತೋಳುಗಳನ್ನು ಅಗಲಿಸಿ ಹಿಡಿದಂತಿರುವ, ಈ ಗೊಂಬೆಯ ಮುಂಗೈವರೆಗಿನ ಭಾಗ ಮಾತ್ರ ಇದ್ದು, ಎರಡೂ ಹಸ್ತಗಳು ಮುರಿದು ಹೋಗಿವೆ. ಕಾಲುಗಳಲ್ಲಿ ಎಡತೊಡೆಯ ಭಾಗ ಮಾತ್ರವಿದೆ. ಬಲಗಾಲು ಸೊಂಟದ ಭಾಗದಿಂದಲೇ ಮುರಿದಿದೆ. ಆದ್ದರಿಂದ ಗೊಂಬೆಯು ಕುಳಿತ ಭಂಗಿಯಲ್ಲಿದ್ದಿತೋ ನಿಂತ ಭಂಗಿಯಲ್ಲಿದ್ದಿತೋ ಎಂಬುದನ್ನು ಗುರುತಿಸುವುದು ಅಸಾಧ್ಯವಾಗಿದೆ. ಗೊಂಬೆಯು ಸಂಪೂರ್ಣ ನಗ್ನವಾಗಿದ್ದು ಯಾವುದೇ ರೀತಿಯ ವಸ್ತ್ರಗಳನ್ನು ಧರಿಸಿಲ್ಲ. ಆದರೆ ಸ್ತನಗಳ ಮೇಲ್ಭಾಗದಲ್ಲಿ ಕೊರಳಲ್ಲಿ 'ನೆಕ್ಲೆಸ್' ರೀತಿಯ ಒಡವೆಯೊಂದನ್ನು ಧರಿಸಿರುವಂತೆ ರಚಿಸಿದೆ. ತೆಳುವಾದ ಹೊಟ್ಟೆ, ಸಿಂಹಕಟಿ, ಹಾಗೂ ಪ್ರಮಾಣಬದ್ಧವಾದ ಅಂಗಸೌಷ್ಟವದಿಂದ ಕೂಡಿರುವ ಈ ಸ್ತ್ರೀ ಗೊಂಬೆಯ ಹೊಕ್ಕಳು ಹಾಗೂ ಕೊರಳಲ್ಲಿರುವ ಒಡವೆ ಸ್ಪಷ್ಟವಾಗಿ ಕಾಣುವಂತೆ ಶಿಲ್ಪಿಯು ನಿರ್ಮಿಸಿರುತ್ತಾನೆ.

ಮತ್ತೊಂದು ಗೊಂಬೆಯು ಪುರುಷನದಾಗಿದ್ದು ೭ ಸೆಂ.ಮೀ. ಉದ್ದ ಹಾಗೂ ೫.೪ ಸೆಂ.ಮೀ. ಅಗಲವಾಗಿದೆ. ಇದೂ ಸಹ ರುಂಡ ಹಾಗೂ ಕೈಕಾಲುಗಳನ್ನು ಕಳೆದುಕೊಂಡಿದೆ. ಬಲಗೈ ಮೊಣಕೈವರೆಗೆ ಮಾತ್ರವಿದ್ದು, ಎಡಗೈ ಹಾಗೂ ಎರಡೂ ಕಾಲುಗಳು ಸಂಪೂರ್ಣ ಹಾಳಾಗಿವೆ. ಗೊಂಬೆಯ ದೇಹದ ಮೇಲೆ ಯಾವುದೇ ವಸ್ತ್ರಗಳಿಲ್ಲದಿದ್ದರೂ, ಕೊರಳಲ್ಲಿ ಒಂದು ಆಭರಣ ಧರಿಸಿರುವಂತೆ ಕಂಡುಬರುತ್ತದೆ. ಇದೂ



ಕಾಳನಾಯಕನಹಳ್ಳಿಯಲ್ಲಿದೊರೆತ ಮಡಿಕೆಯ ಚೂರು

ಸಹ ಅಸಮಗ್ರವಾಗಿ ಲಭಿಸಿರುವುದರಿಂದ ಯಾವ ಭಂಗಿಯಲ್ಲಿದೆ ಎಂದು ಹೇಳುವದು ಅಸಾಧ್ಯ. ಈ ಗೊಂಬೆಗಳನ್ನು ಜೇಡಿಮಣ್ಣಿನಿಂದ ನಿರ್ಮಿಸಿ ನಂತರ ಸುಟ್ಟಿರುವುದರಿಂದ ತುಂಬಾ ಗಟ್ಟಿಯಾಗಿವೆ.

ಬೃಹತ್ ಶಿಲಾಯುಗ ಸಮಾಧಿಗಳಲ್ಲಿ ಈ ರೀತಿಯ ಟೆರಾಕೋಟಾ ಮಣ್ಣಿನ ಗೊಂಬೆಗಳು ದೊರೆತಿರುವ ಹಲವಾರು ನಿದರ್ಶನಗಳು ಇವೆ :

ಘಟಪ್ರಭಾ ನದಿಯ ದಂಡೆಯ ಮೇಲಿನ ಹೆರಕಲ್ ಗ್ರಾಮದ ಶಿಲಾಯುಗದ ನಿವೇಶನದಲ್ಲಿ ಸುಟ್ಟ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ. ಬೆಳಗಾವಿ ಹತ್ತಿರದ ವಡಗಾಂವ ಮಾಧವಪುರದಲ್ಲಿ ಸಹ ಸುಟ್ಟ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ; ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲ್ಲೂಕಿನ ಭೈರವನ ಪಾದ ಎಂಬಲ್ಲಿ ಸುಟ್ಟ ಮಣ್ಣಿನ ಗೊಂಬೆಗಳು ದೊರೆತಿವೆ;[4] ಅದೇ ತಾಲ್ಲೂಕಿನ ಸಿರಗುಂಬಿ ಹೊಸಳ್ಳಿ ಎಂಬ ಗ್ರಾಮದಲ್ಲಿ ಸುಟ್ಟ ಮಣ್ಣಿನ ಹೆಣ್ಣು ಗೊಂಬೆ ದೊರೆತಿದೆ,[5] ರಾಯಚೂರು ಜಿಲ್ಲೆಯ ಪಿಕ್ಲಿಹಾಳ್ ಮತ್ತು ತೆಕ್ಕಲಕೋಟೆಯ ನಿವೇಶನಗಳಲ್ಲಿಯೂ ಸಹ ಕೆಲವು ಮಣ್ಣಿನ ಗೊಂಬೆಗಳು ದೊರೆತಿರುವೆ;[6] ಬಲೂಚಿಸ್ತಾನದ ಕಿಲಿಘುಲ್ ಮೊಹಮ್ಮದ್ ಎಂಬ ಪ್ರದೇಶದ ಬಳಿಯಲ್ಲಿರುವ 'ದಾಂಬ್ ಸದಾತ್'ನಲ್ಲಿ

---

4 ಡಾ॥ ಆರ್. ಎಸ್. ಪಂಚಮುಖಿ., ಕರ್ನಾಟಕದ ಇತಿಹಾಸ, ಪುಟ ೫೬

5 ಅದೇ ಪುಟ ೫೭

6 ಡಾ॥ ಬಿ. ಮುದ್ದಾಚಾರಿ., ದಕ್ಷಿಣ ಭಾರತದ ಇತಿಹಾಸ, ಪುಟ ೫೭



ಶಿಲಾಯುಗದ ಕಬ್ಬಿಣದ ಕೊಡಲಿ

ದೊರೆತ ಗಡಸು ಜೇಡಿಮಣ್ಣಿನ ಪ್ರತಿಮೆಗಳು ಕ್ರಿ.ಪೂ. ೨೩೦೦ ವರ್ಷಗಳಷ್ಟು ಹಳೆಯದೆಂದು ವಿದ್ವಾಂಸರು ಗುರುತಿಸಿದ್ದಾರೆ.[7] ಹಾಗೆಯೇ ಕೊಲ್ಹಾಪುರದ ಬಳಿಯ ಬ್ರಹ್ಮಪುರಿ ಎಂಬ ಗ್ರಾಮದ ಬಳಿ ಶಾತವಾಹನರ ಕಾಲದ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ. ಸನ್ನತಿಯಲ್ಲೂ ಇದೇ ಕಾಲದ ಮಣ್ಣಿನ ಗೊಂಬೆಗಳು ಪತ್ತೆಯಾದ ವರದಿಯಾಗಿದೆ.

ಬೆಂಗಳೂರು ಜಿಲ್ಲೆಯಲ್ಲಿ ಬೃಹತ್‌ಶಿಲಾಯುಗದ ನಿವೇಶನಗಳು ಪತ್ತೆಯಾಗಿದ್ದರೂ ಸಹ ಒಂದರಲ್ಲೂ ಮಣ್ಣಿನ ಗೊಂಬೆಗಳು ಪತ್ತೆಯಾದ ವರದಿಯಾಗಿಲ್ಲದಿರುವದು ಗಮನಾರ್ಹವಾದ ಅಂಶ. ಆದ್ದರಿಂದ ಪ್ರಸ್ತುತ ಕಾಳನಾಯಕನ ಹಳ್ಳಿಯಲ್ಲಿ ಪತ್ತೆಯಾಗಿರುವ ಮಣ್ಣಿನ ಗೊಂಬೆಗಳು ಪ್ರಾಮುಖ್ಯತೆ ಪಡೆದುಕೊಂಡಿವೆ. ಕಾಳನಾಯಕನಹಳ್ಳಿಯ ಬೃಹತ್ ಶಿಲಾಯುಗ ನಿವೇಶನಗಳಲ್ಲಿ ಉತ್ಖನನ ನಡೆಸಿದರೆ ಅಮೂಲ್ಯವಾದ ವಿಷಯಗಳು ಹೊರ ಬರಬಹುದಾದ ಸಾಧ್ಯತೆಗಳಿವೆಯೆಂದು ಹೇಳಬಹುದು.

---

7 (ಮೂಲ) ಕ. ಅಂತೋನವ ಜಿ. ಬೊಂಗಾರ್ಡ್-ಲೆವಿನ್, ಅನು : ಕೆ. ಎಲ್. ಗೋಪಾಲಕೃಷ್ಣರಾವ್., ಭಾರತದ ಇತಿಹಾಸ, ಪುಟ ೧೪